# ಮುಂಬಯಿ ಕರ್ನಾಟಕ : ಪ್ರಾದೇಶಿಕ ಇತಿಹಾಸದ ಆಕರಗಳು ಮತ್ತು ಅವುಗಳ ಅಧ್ಯಯನ

- ಡಾ|| ಶ್ರೀನಿವಾಸ ಹಾವನೂರ

ಈಗಿನ ಕರ್ನಾಟಕ ರಾಜ್ಯದ ನಾಲ್ಕು ಜಿಲ್ಲೆಗಳಾದ ಬಿಜಾಪುರ, ಬೆಳಗಾವಿ, ಧಾರವಾಡ ಮತ್ತು ಉತ್ತರ ಕನ್ನಡಗಳನ್ನೊಳಗೊಂಡ ಸಣ್ಣ ಪ್ರಾಂತ್ಯವೇ ಮುಂಬಯಿ ಕರ್ನಾಟಕ. ಕ್ರಿ.ಶ. ೧೮೧೮ರ ಬ್ರಿಟಿಷರ ಆಳ್ವಿಕೆಯ ಆರಂಭದಲ್ಲಿ ಮೇಲಿನ ಜಿಲ್ಲೆಗಳನ್ನು ಮುಂಬಯಿ ಪ್ರಾಂತ್ಯಕ್ಕೆ ಸೇರಿಸಿದಾಗ ಈ ಭಾಗಕ್ಕೆ 'ಮುಂಬಯಿ ಕರ್ನಾಟಕ' ಎಂಬ ಹೆಸರು ಬಂದಿತು. (ಉತ್ತರ ಕನ್ನಡ ಕ್ರಿ.ಶ. ೧೮೬೨ರಲ್ಲಿ ಈ ವಿಭಾಗಕ್ಕೆ ಸೇರಿಸಲ್ಪಟ್ಟಿತು). ಕ್ರಿ.ಶ. ೧೯೫೬ರಲ್ಲಿ ರಾಜ್ಯಗಳ ಪುನರ್ರಚನೆಯಾಗುವವರೆಗೂ ಇದೇ ಹೆಸರು ಮುಂದುವರೆಯಿತು.

ಆದಿಲ್‌ಷಾಹಿಗಳ ಪತನ (ಕ್ರಿ.ಶ ೧೬೮೬) ಮತ್ತು ಔರಂಗಜೇಬನ ಮರಣ (ಕ್ರಿ.ಶ. ೧೭೦೭)ಗಳ ನಂತರದ ಪೇಷ್ವಾಯಿ ಕಾಲದಲ್ಲಿಯೇ ಈ ಪ್ರಾಂತ್ಯಕ್ಕೆ ಒಂದು ಅಂಗೀಕೃತ ಅಸ್ತಿತ್ವವಿದ್ದಿತು. ನಂತರ ಕೆಲವು ಕಾಲ ಇದು ಸತಾರ, ಕೊಲ್ಲಾಪುರ ಮತ್ತು ಸಾಂಗ್ಲಿಯ ಮರಾಠಿ ನಾಯಕರ, ಮೈಸೂರು ಅರಸರ ಹಾಗೂ ಕೆಲ ಮಟ್ಟಿಗೆ ನಿಜಾಮರ ವಶದಲ್ಲಿದ್ದಿತು. ಮೇಲಿನ ನಾಯಕರು ಆಗಿಂದಾಗ್ಗೆ ನಡೆಸಿದ ಧಾಳಿಗಳನ್ನು ಈ ಪ್ರಾಂತ್ಯದ ಸ್ವಾದಿ, ಸವಣೂರು, ಕಿತ್ತೂರು ಮುಂತಾದ ಸಂಸ್ಥಾನಿಕರು ಭಾರಿ ಕಪ್ಪ ಕಾಣಿಕೆಗಳನ್ನು ನೀಡಿ, ನಿವಾರಿಸಿಕೊಳ್ಳಬೇಕಿತ್ತು. ತುಂಗಭದ್ರಾ ನದಿಯ ನೈಸರ್ಗಿಕ ತಡೆಯಿಂದಾಗಿ ಮೈಸೂರು ಅರಸರ ಧಾಳಿ ಪರಿಣಾಮಕಾರಿಯಾಗಿರಲಿಲ್ಲ. ಆದರೆ ಮರಾಠರ ಭೌಗೋಲಿಕ ಸಾಮೀಪ್ಯದಿಂದಾಗಿ ಅವರೊಡನೆ ಈ ಪ್ರಾಂತ್ಯದವರ ಒಡನಾಟ ಆಳವಾಗಿಯೇ ಇದ್ದಿತು. ಇಬ್ಬರ ನಡುವೆ ಸಾಮಾಜಿಕ, ಧಾರ್ಮಿಕ ಮತ್ತು ಆಡಳಿತಾತ್ಮಕ ಕೊಡುಪಡೆಗಳು ನಡೆಯುತ್ತಿದ್ದವು. ಅಂತರ್ ಪ್ರಾಂತೀಯ ವಿವಾಹಗಳು ಸಾಮಾನ್ಯವಾಗಿದ್ದು, ಎಷ್ಟೋ ಸಂಸಾರಗಳು ಇತ್ತಿಂದತ್ತ ವಲಸೆ ಹೋದ ಸಂದರ್ಭಗಳೂ ಇದ್ದುವು. ಮರಾಠರ ರಾಜಕೀಯ ಪರಮಾಧಿಕಾರದಿಂದ ಮುಂಬಯಿ ಕರ್ನಾಟಕದ ಮೇಲೆ ಅವರ ಪ್ರಭಾವ ತೀಕ್ಷ್ಣವಾಗಿತ್ತು. ಈ ಪ್ರಾಂತ್ಯದ ಸ್ವಾತಂತ್ರ್ಯ ಚಳುವಳಿ ಹಾಗೂ ಸಾಮಾಜಿಕ ಮತ್ತು ಶೈಕ್ಷಣಿಕ ಪುನರುತ್ಥಾನಗಳ ಕಾರಣಪುರುಷರೂ ಅಗರ್‌ಕರ್, ತಿಲಕ್, ರಾನಡೆ ಮತ್ತು ಗೋಖಲೆ ಮುಂತಾದವರೇ ಆಗಿದ್ದರು.

'ಮುಂಬಯಿ ಕರ್ನಾಟಕ' ಎಂಬ ಹಣೆಪಟ್ಟಿ ಈಗ ಈ ಪ್ರಾಂತ್ಯಕ್ಕೆ ಇಲ್ಲವಾದುದರಿಂದ ಕ್ರಿ.ಶ. ೧೭೦೦ ರಿಂದ ೧೯೨೦ರ ತನಕ, ಅಂದರೆ ಪೇಷ್ವೆಯರ ಕಾಲದಿಂದ ತಿಲಕರ ತನಕ ಈ ಪ್ರಾಂತ್ಯದಲ್ಲಿ ಸಾಮಾಜಿಕ ಮತ್ತು ಸಾಂಸ್ಕೃತಿಕ ರಂಗಗಳ ಪರಸ್ಪರ ಕೊಡುಪಡೆಯ ಸುದೀರ್ಘ ಅಧ್ಯಯನ ನಡೆಸಬೇಕೆಂದು ಯೋಜಿಸಲಾಗಿದೆ. ಅಧ್ಯಯನ ನಡೆಯಬೇಕಾದ ಕಾಲವನ್ನು ಸ್ಥೂಲವಾಗಿ ಕೆಳಕಂಡಂತೆ ವಿಂಗಡಿಸಬಹುದು ;

ಕ್ರಿ.ಶ. ೧೭೦೦ ರಿಂದ ೧೮೦೦–ಪೇಷ್ವಾಯಿ ಪ್ರಭಾವದ ಕಾಲ

ಕ್ರಿ.ಶ. ೧೮೦೦ ರಿಂದ ೧೮೮೦–ಬ್ರಿಟಿಷರ ಆಳ್ವಿಕೆ (ಪ್ರಥಮ ಘಟ್ಟ)

ಕ್ರಿ.ಶ. ೧೮೮೦ ರಿಂದ ೧೯೨೦– ಪುನರುತ್ಥಾನ (ತಿಲಕರ ಕಾಲ)

ಈ ಪ್ರಾಂತ್ಯದ ಇತಿಹಾಸ ಪುನರ್ರಚನೆಯ ಆಕರ ಗಳನ್ನು ಕೆಳಕಂಡ ರೀತಿ ವಿಂಗಡಿಸಬಹುದು.

೧) ಪತ್ರಾಗಾರ ಇಲಾಖೆಯಲ್ಲಿ ಲಭ್ಯವಿರುವ ಕಾಗದ ಪತ್ರ, ದಾಖಲೆಗಳು (ಮೋಡಿ ಲಿಪಿಯ ಮರಾಠಿ ದಾಖಲೆಗಳು ಹಾಗೂ ಇಂಗ್ಲಿಷ್, ಕನ್ನಡ, ಪರ್ಷಿಯನ್ ಮತ್ತು ಕೆಲವು ಐರೋಪ್ಯ ಭಾಷೆ ಗಳ ದಾಖಲೆಗಳು)

೨) ಸಾಹಿತ್ಯಕ ಕೃತಿಗಳು (ಕನ್ನಡ ಮತ್ತು ಮರಾಠಿ)

೩) ಬಖೈರುಗಳು/ಖೈಫೀಯತ್‌ಗಳು

೪) ಜಾನಪದ ಸಂಪ್ರದಾಯಗಳು

೫) ವಂಶಾವಳಿ (ವಂಶಗಳ ಹೆಸರುಗಳು, ಹೊಸ ಸ್ಥಳ ನಾಮಗಳು)

೬) ಚರಿತ್ರಪೂರ್ವ ಮಾನವ ನಿರ್ಮಾಣಗಳು

೭) ವಾಸ್ತುಶಿಲ್ಪ ಉಳಿಕೆಗಳು

೮) ವಾಚಿಕ ಇತಿಹಾಸ

ಆಡಳಿತ, ಕಲೆ ಮತ್ತು ವಾಸ್ತುಶಿಲ್ಪ, ವಾಣಿಜ್ಯ ಮತ್ತು ಆರ್ಥಿಕ ಪರಿಸ್ಥಿತಿ, ಭಾಷೆ ಮತ್ತು ಸಾಹಿತ್ಯ, ಸೇನಾ ವ್ಯವಸ್ಥೆ, ಧಾರ್ಮಿಕ ಕಟ್ಟುಪಾಡು, ಸಾಮಾಜಿಕ ನೀತಿ, ಇವುಗಳ ಸಂಬದ್ಧತೆ— ಈ ದಿಶೆಯಲ್ಲಿ ಆಕರಗಳನ್ನು ಪತ್ತೆ ಹಚ್ಚಿ ದಾಖಲಿಸಲು ಉದ್ದೇಶಿಸಲಾಗಿದೆ. ಇದು ಮಾಮೂಲು ದಾಖಲಿಕೆಯಾಗಿರದೆ, ಮುಂಬಯಿ ಕರ್ನಾಟಕ ಪ್ರಾಂತ್ಯದ ಅಧ್ಯಯನ ಮಾಹಿತಿಯ ಪ್ರಾಮುಖ್ಯತೆಯ ಉಲ್ಲೇಖವೆಂಬುದು ಗಮನಾರ್ಹ. ಮೇಲಿನ ಮಾಹಿತಿ ಅಗಾಧವಾಗಿದ್ದು, ಗೌಣವೆಂಬಂತೆ ಕಾಣುವ ವಿಷಯಗಳೂ ತತ್ಕಾಲಕ್ಕೆ ಲಭ್ಯವಾಗಲು, ಅವು ಗಳನ್ನು ಗಣಕ ಯಂತ್ರದಲ್ಲಿ ಶೇಖರಿಸಿಡಲು ಉದ್ದೇಶಿಸ ಲಾಗಿದೆ.

ಆಡಳಿತಾತ್ಮಕ ದೃಷ್ಟಿಯಿಂದ ಮಾತ್ರ ಸೃಷ್ಟಿಯಾದ ನಾಲ್ಕು ಜಿಲ್ಲೆಗಳಿಗೇ ಈ ಅಧ್ಯಯನ ಸೀಮಿತವಾಗಿದ್ದರೂ ನೆರೆಯ ಪ್ರಾಂತ್ಯಗಳಾದ ಸೊಲ್ಲಾಪುರ, ಗುಲ್ಬರ್ಗ, ಚಿತ್ರದುರ್ಗ, ಗೋವಾ ಹಾಗೂ ದಕ್ಷಿಣ ಕನ್ನಡಗಳಿಗೆ ಈ ಪ್ರಾಂತ್ಯ ನಿಕಟವಾಗಿದ್ದುದರಿಂದ ಮೇಲಿನ ಸ್ಥಳಗಳ ಬಗ್ಗೆ ಲಭ್ಯವಿರುವ ಆಕರಗಳ ಶೋಧನೆ ಹಾಗೂ ಅಧ್ಯಯನಗಳೂ ಇಲ್ಲಿ ಸೇರಿವೆ.

ಆಕರಗಳು ಲಭ್ಯವಿರುವ ಸ್ಥಳಗಳೆಂದರೆ :

೧) ಪುಣೆ, ಮುಂಬಯಿ, ಬೆಂಗಳೂರು ಮತ್ತು ಮೈಸೂರುಗಳಲ್ಲಿನ ರಾಜ್ಯ ಪತ್ರಾಗಾರಗಳು (ಪುಣೆಯ ಪೇಶ್ವಾಯಿ ದಫ್ತರುಗಳು ಮುಖ್ಯ)

೨) ದೆಹಲಿ ಮತ್ತು ಕಲ್ಕತ್ತಾಗಳ ಕೇಂದ್ರ ಪತ್ರಾಗಾರ ಗಳು.

೩) ಹೊರದೇಶದ ಪತ್ರಾಗಾರಗಳು – ಬ್ರಿಟಿಷ್ ಗ್ರಂಥಾಲಯ, ಲಂಡನ್.
(ಇಲ್ಲಿನ ಓರಿಯಂಟಲ್ ಕಲೆಕ್ಷನ್ ಮತ್ತು ಇಂಡಿಯಾ ಆಫೀಸ್ ಲೈಬ್ರರಿ), ಆಕ್ಸ್‌ಫರ್ಡ್, ಕೇಂಬ್ರಿಡ್ಜ್ ಮತ್ತು ಎಡಿನ್‌ಬರೋಗಳ ವಿಶ್ವ ವಿದ್ಯಾಲಯ ಗ್ರಂಥಾಲಯಗಳು.

೪) ಕೊಲ್ಲಾಪುರ, ರಾಮದುರ್ಗ ಮುಂತಾದೆಡೆಗಳ ಸಂಸ್ಥಾನಿಕರ ಸಂಗ್ರಹಗಳು.

೫) ಖಾಸಗಿ ಸಂಗ್ರಹಗಳು.

೬) ಮುಂಬಯಿ ಸರಕಾರದ ಇನಾಂ ಕಮಿಷನ್ ನಡ ವಳಿಕೆಗಳು.

೭) ವಿಶ್ವವಿದ್ಯಾಲಯ ಗ್ರಂಥಾಲಯಗಳಲ್ಲಿ ಲಭ್ಯವಿರುವ ಆಡಳಿತ ವರದಿಗಳು ಗ್ಯಾಸೆಟಿಯರ್ ಮುಂತಾದ ಮುದ್ರಿತ ಸಾಮಗ್ರಿ.

**ಮುಂದುವರೆಯುವ ವಿಧಾನ :**

ಮೊದಲನೆಯ ಹಂತ : ಮುಂಬಯಿ,ಪುಣೆ,ಬೆಂಗಳೂರು, ಮೈಸೂರು, ನವದೆಹಲಿ ಮತ್ತು ಕಲ್ಕತ್ತಗಳಲ್ಲಿ ಲಭ್ಯವಿರುವ ಪುಸ್ತಕಗಳು, ವರದಿಗಳು ಹಾಗೂ ಪತ್ರಿಕೆಗಳೇ ಮುಂತಾದ ಮುದ್ರಿತ ಸಾಮಗ್ರಿಯ ಪರಿ ಶೀಲನೆ.

ಎರಡನೆಯ ಹಂತ : ಮುಂಬಯಿ ಕರ್ನಾಟಕಕ್ಕೆ ಸಂಬಂಧಿಸಿದಂತೆ ಮೇಲ್ಕಂಡ ಸ್ಥಳಗಳಲ್ಲಿನ ದಾಖಲೆ ಪರಿಶೀಲನೆಗಾಗಿ ಆಯಾಯ ಸ್ಥಳಗಳ ಪತ್ರಾಗಾರಗಳ ಭೇಟಿ.

ಮೂರನೆಯ ಹಂತ : ಕನ್ನಡ ಹಾಗೂ ಮರಾಠಿ ಸಾಹಿತ್ಯ ಕೃತಿಗಳನ್ನು, ಪ್ರವಾಸ ಕಥನಗಳನ್ನೂ ಬಖೈರುಗಳು ಮತ್ತು ಖೈಫಿಯತ್‌ಗಳನ್ನೂ ಕೂಲಂಕಷವಾಗಿ ಪರಿಶೀಲಿಸುವುದು.

ನಾಲ್ಕನೆಯ ಹಂತ : ಐತಿಹಾಸಿಕ ಘಟನಾವಳಿಗಳನ್ನು ಒದಗಿಸುವ ಲಾವಣಿಗಳೇ ಮುಂತಾದ ಜಾನಪದ ಸಾಹಿತ್ಯದ ಪರಾಮರ್ಶೆ.

ಐದನೆಯ ಹಂತ : ವಲಸೆಗಳ ಬಗ್ಗೆ ಮಾಹಿತಿ ನೀಡುವ ವಂಶಗಳ ಕುಲನಾಮಗಳನ್ನು ಪತ್ತೆ ಮಾಡುವುದು.

ಆರನೆಯ ಹಂತ : ಕೆಲವು ಹಿರಿಯ ವ್ಯಕ್ತಿಗಳನ್ನು ಸಂದರ್ಶಿಸಿ ತನ್ಮೂಲಕ ಅವರವರ ವಂಶ ಚರಿತ್ರೆಯನ್ನೂ ಜೀವನದ ಪ್ರಮುಖ ಘಟನೆಗಳನ್ನೂ ಹಿಂದಿನ ಸಾಮಾಜಿಕ ಸಂಪರ್ಕಗಳನ್ನೂ ಅರಿಯುವುದು.

ಏಳನೆಯ ಹಂತ : ಈ ರೀತಿ ಸಂಗ್ರಹಿಸಿದ ಮಾಹಿತಿಯ ಗ್ರಂಥ ವಿವರಣಾ ಪಟ್ಟಿ, ಅಪರೂಪ ಪದಗಳು ಮತ್ತು ಪ್ರಮುಖ ಐತಿಹಾಸಿಕ ವಿಷಯಗಳನ್ನು ಕ್ರೋಢೀಕರಿಸುವುದು.

ಎಂಟನೆಯ ಹಂತ : ಮುಖ್ಯ ದಾಖಲೆಗಳ ಪರಿಶೀಲನೆಗಾಗಿ ಲಂಡನ್ನಿನ ಇಂಡಿಯಾ ಆಫೀಸ್ ಲೈಬ್ರರಿ ಅಂಡ್ ರೆಕಾರ್ಡ್ಸ್, ಹಾಗೂ ಇತರೆ ಬ್ರಿಟಿಷ್ ಗ್ರಂಥಾಲಯಗಳ ಭೇಟಿ.

**ಸಾರಾಂಶ**

ಈ ಯೋಜನೆ ಪೂರ್ಣಗೊಂಡಾಗ ಇತಿಹಾಸ ಅಧ್ಯಯನದ ವಿಧಾನಶಾಸ್ತ್ರದ ಕೆಲವು ಪ್ರಮುಖ ಅಂಶಗಳು ಬೆಳಕಿಗೆ ಬರುತ್ತವೆ–ಅವೆಂದರೆ :

ಅ) ಒಂದು ಸಣ್ಣ ಪ್ರಾಂತ್ಯದ ಅನನ್ಯತೆ ಸ್ಫುಟವಾಗಿ ಚಿತ್ರಿತವಾಗುವಂತೆ ಅದರ ಚರಿತ್ರೆಯ ಪುನರ್‌ರಚನೆ.

ಆ) ಸ್ಥಳೀಯ ಇತಿಹಾಸದ ಪ್ರಬಲ ಮೂಲಗಳಾದ ಸಣ್ಣ ನಾಯಕರ ಹಾಗೂ ಸಂಸ್ಥಾನಿಕರ ಚರಿತ್ರೆ ರೂಪಗೊಳ್ಳುವುದು.

ಇ) ನೆರೆ ರಾಜ್ಯಗಳ ಸಾಮಾಜಿಕ ಕೊಡುಕೊಳ್ಳುವಿಕೆಯ ಸವಿವರ ಅಧ್ಯಯನ.

ಈ) ಅಸಾಂಪ್ರದಾಯಿಕ ಆಕರಗಳಲ್ಲಿನ ಮಾಹಿತಿಯನ್ನು ನಿಖರವಾಗಿ ಗುರ್ತಿಸುವ ಕ್ರಮದ ಮನವರಿಕೆ.

ಉ) ಪತ್ರಾಗಾರ ದಾಖಲೆಗಳ ಅಧ್ಯಯನವನ್ನು ತ್ವರಿತಗೊಳಿಸುವಿಕೆ.

ಊ) ಐತಿಹಾಸಿಕ ಮಾಹಿತಿಯ ರಕ್ಷಣೆ ಹಾಗೂ ವ್ಯವಸ್ಥಿತ ಅಧ್ಯಯನಕ್ಕಾಗಿ ಗಣಕ ಯಂತ್ರದ ಬಳಕೆ.

ಋ) ಒಂದು ಭಾಷೆಯಲ್ಲಿ ನಡೆದಿರುವ ಅಧ್ಯಯನವನ್ನು ಅನ್ಯ ಭಾಷೆಯ ಪಂಡಿತರ ಗಮನಕ್ಕೆ ತರುವುದು.

ೠ) ಮುಂದಿನ ಆಳವಾದ ಅಧ್ಯಯನಕ್ಕೆ ಪೂರ್ವಸಿದ್ಧ ಮೂಲಗಳನ್ನು ಒದಗಿಸುವುದು.

(ಕನ್ನಡಾನುವಾದ/ಟಿ.ಜಿ. ನರಸಿಂಹಮೂರ್ತಿ)